

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1349 |
| ಸದಸ್ಯರ ಹೆಸರು | : | ಶ್ರೀ ಆರ್.ಬಿ. ತಿಮ್ಮಾಪೂರ |
| ಉತ್ತರಿಸುವ ದಿನಾಂಕ | : | 24-12-2021 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಮಾಜ ಕಲ್ಯಾಣ ಇಲಾಖೆಯಿಂದ ನೀಡಲಾಗುವ ವಿದ್ಯಾರ್ಥಿ ವೇತನಗಳನ್ನು ಕೆಲವು ಶಾಲಾ ಕಾಲೇಜುಗಳ ವಿದ್ಯಾರ್ಥಿಗಳಿಗೆ ನೀಡದಿರುವುದು ಕಂಡು ಬಂದಿದೆಯೇ; | ಬಂದಿದೆ.<br>ಸಮಾಜ ಕಲ್ಯಾಣ ಇಲಾಖೆ ವತಿಯಿಂದ 2018-19ನೇ ಸಾಲಿನಿಂದ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನವನ್ನು ಇ-ಆಡಳಿತ ಇಲಾಖೆಯು ಅಭಿವೃದ್ಧಿಪಡಿಸಿ ನಿರ್ವಹಣೆ ಮಾಡುತ್ತಿರುವ **ರಾಜ್ಯ ವಿದ್ಯಾರ್ಥಿವೇತನ ಪೋರ್ಟಲ್ (SSP)**ದ ಮೂಲಕ ಮಂಜೂರು ಮಾಡುತ್ತಿದ್ದು, ವಿದ್ಯಾರ್ಥಿಯ ಆಧಾರ್ ಸಂಖ್ಯೆಗೆ ಜೋಡಿತವಾಗಿರುವ ಬ್ಯಾಂಕ್ ಖಾತೆಗೆ ವಿದ್ಯಾರ್ಥಿವೇತನವನ್ನು ಮಂಜೂರು ಮಾಡಲಾಗುತ್ತಿದೆ. ಕೆಲವೊಂದು ಪ್ರಕರಣಗಳಲ್ಲಿ ವಿದ್ಯಾರ್ಥಿಯ ಆಧಾರ್ ಸಂಖ್ಯೆಗೆ ಬ್ಯಾಂಕ್ ಖಾತೆ ಜೋಡಣೆಯಾಗದೇ ಇರುವುದರಿಂದಲೂ ಹಾಗೂ SATS ತಂತ್ರಾಂಶದಲ್ಲಿನ ವಿದ್ಯಾರ್ಥಿಯ ಹೆಸರಿಗೂ ಹಾಗೂ ವಿದ್ಯಾರ್ಥಿಯ ಆಧಾರ್ ಕಾರ್ಡ್‌ನಲ್ಲಿನ ಹೆಸರಿಗೂ ಕೆಲವೊಂದು ವ್ಯತ್ಯಾಸಗಳಿರುವುದರಿಂದ ಮಂಜೂರಾತಿ ಪ್ರಕ್ರಿಯೆಯು ತಾಂತ್ರಿಕವಾಗಿ ವಿಳಂಬವಾಗಿದೆ. ಮುಂದುವರೆದು, 2021-22ನೇ ಸಾಲಿನಲ್ಲಿ ಅಕ್ಟೋಬರ್ 2021ರ ಮಾಹೆಯಲ್ಲಿ ಪ್ರಸಕ್ತ ವರ್ಷದ ನೊಂದಣಿ ಕಾರ್ಯ ಪ್ರಾರಂಭವಾಗಿದ್ದು, ವಿದ್ಯಾರ್ಥಿವೇತನ ಮಂಜೂರು ಮಾಡಲಾಗುತ್ತಿದೆ.<br>2019-20ನೇ ಸಾಲಿನಿಂದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ ಕಾರ್ಯಕ್ರಮವನ್ನು ಇ-ಆಡಳಿತ ಇಲಾಖೆಯು ಅಭಿವೃದ್ಧಿಪಡಿಸಿ ನಿರ್ವಹಣೆ ಮಾಡುತ್ತಿರುವ **ರಾಜ್ಯ ವಿದ್ಯಾರ್ಥಿವೇತನ ಪೋರ್ಟಲ್(SSP)**ದ ಮೂಲಕ ಮಂಜೂರು ಮಾಡುತ್ತಿದ್ದು, ತಂತ್ರಾಂಶದಲ್ಲಿ ನಮೂದಾಗಿರುವ ಕಾಲೇಜು ಶುಲ್ಕಗಳು ಮತ್ತು ವಿದ್ಯಾರ್ಥಿಗಳು ಅರ್ಜಿ ಸಲ್ಲಿಸುವ ಸಮಯದಲ್ಲಿ ನಮೂದು ಮಾಡಿರುವ ಅಂಕಿ-ಅಂಶಗಳಿಗೆ ವ್ಯತ್ಯಾಸಗಳಿರುವುದರಿಂದ ವಿದ್ಯಾರ್ಥಿವೇತನ ಮಂಜೂರು ಮಾಡಲು ವಿಳಂಬವಾಗುತ್ತದೆ. ವಿದ್ಯಾರ್ಥಿಯ ಬ್ಯಾಂಕ್ ಖಾತೆಯು ಆಧಾರ್ ಜೋಡಣೆಯಾಗದೇ ಇದ್ದರೇ ಅಂತಹ ಪ್ರಕರಣಗಳಲ್ಲಿ ವಿದ್ಯಾರ್ಥಿವೇತನ ಮಂಜೂರಾತಿ ಮಾಡಲು ವಿಳಂಭವಾಗುತ್ತದೆ. ಅಲ್ಲದೇ, 2021-22ನೇ ಸಾಲಿನಲ್ಲಿ ತಂತ್ರಾಂಶದಲ್ಲಿ ವಿದ್ಯಾರ್ಥಿಗಳು ಅರ್ಜಿ ಸಲ್ಲಿಸಲು 2021ರ ಸೆಪ್ಟೆಂಬರ್ ಮಾಹೆಯಿಂದ ಅವಕಾಶ ಕಲ್ಪಿಸಲಾಗಿದೆ.<br>ರಾಜ್ಯ ವಿದ್ಯಾರ್ಥಿವೇತನ ತಂತ್ರಾಂಶದಲ್ಲಿ ಮೊದಲಿಗೆ ಪಿ.ಯು.ಸಿ. ವಿದ್ಯಾರ್ಥಿಗಳ ಅರ್ಜಿಗಳನ್ನು ಅನುಮೋದನೆ ಮಾಡಲು ಅವಕಾಶ ಕಲ್ಪಿಸಿದ್ದು, ಸ್ವೀಕೃತಗೊಂಡ ಒಟ್ಟು 1.73 ಲಕ್ಷ ಪಿ.ಯು.ಸಿ. ವಿದ್ಯಾರ್ಥಿಗಳ ಅರ್ಜಿಗಳ ಪೈಕಿ ಈಗಾಗಲೇ ಒಟ್ಟು 1.18 ಲಕ್ಷ ಪಿ.ಯು. ವಿದ್ಯಾರ್ಥಿಗಳ ಅರ್ಜಿಗಳನ್ನು ಅನುಮೋದನೆ ಮಾಡಲಾಗಿದೆ. ಎಲ್ಲಾ ಸಮಸ್ಯೆಗಳನ್ನು ಬಗೆಹರಿಸಿ ವಿದ್ಯಾರ್ಥಿವೇತನ ಮಂಜೂರು ಮಾಡಲಾಗುತ್ತಿದೆ. |